ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಬುಧವಾರ, ದಿನಾಂಕ : 04 ನೇ ಮಾರ್ಚ್, 2020

ಲೋಕೋಪಯೋಗಿ ಇಲಾಖೆಯಲ್ಲಿ ಕಾರ್ಯಪಾಲಕ ಇಂಜಿನಿಯರ್ ಹುದ್ದೆಗಳ ಬಗ್ಗೆ

ಶ್ರೀ ಪಿ.ಆರ್. ರಮೇಶ್ (ನಾಮನಿರ್ದೇಶನ ಹೊಂದಿದವರು) :-

224 (281) ಮಾನ್ಯ ಉಪಮುಖ್ಯಮಂತ್ರಿಗಳು (ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಸಚಿವರು) ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಲೋಕೋಪಯೋಗಿ ಇಲಾಖೆಯಲ್ಲಿ ಮಂಜೂರಾದ/ಅಗತ್ಯವಿರುವ ಸಂಖ್ಯೆಗಿಂತ ಹೆಚ್ಚುವರಿಯಾಗಿ ನಿಯಮ 32ರಡಿ ಪದೋನ್ನತಿಯನ್ನು ನೀಡಲಾಗಿದೆಯೇ ; ಕಾರ್ಯಪಾಲಕ ಇಂಜಿನಿಯರುಗಳ ಮಂಜೂರಾದ ಹುದ್ದೆಗಳು 600, ಪದೋನ್ನತಿ ನೀಡಿರುವುದು 800, ಇದೇ ರೀತಿಯಲ್ಲಿ ಎಲ್ಲಾ ದರ್ಜೆಯ ಇಂಜಿನಿಯರ್ಗಳ ಪದೋನ್ನತಿ ನೀಡಲಾಗಿದೆಯೇ ; (ವಾಸ್ತವ ಅಂಕಿ-ಅಂಶಗಳನ್ನು ನೀಡುವುದು)

(ಆ) ಲೋಕೋಪಯೋಗಿ ಇಲಾಖೆಯಲ್ಲಿ ಹುದ್ದೆ ನಿರೀಕ್ಷಣೆಯಲ್ಲಿರುವ ಇಂಜಿನಿಯರ್ಗಳ ದರ್ಜೆವಾರು ಸಂಖ್ಯೆ ಎಷ್ಟು ; ಸರ್ಕಾರದ ಮೇಲೆ ಆಗುವ ಹಣಕಾಸಿನ ಹೊರೆ ಎಷ್ಟು ; ಅಂದಾಜಿನ ಪ್ರಕಾರ ಸುಮಾರು 500 ವಿವಿಧ ದರ್ಜೆಯ ಇಂಜಿನಿಯರ್ಗಳ ಹುದ್ದೆ ಇಲ್ಲದಿರುವುದು ನಿಜವೇ ; (ಅಂಕಿ-ಅಂಶಗಳನ್ನು ನೀಡುವುದು)

(ಇ) ಮಾನ್ಯ ಮುಖ್ಯಮಂತ್ರಿಗಳಿಂದ ಕಡತದಲ್ಲಿ ವರ್ಗಾವಣೆ ಆದೇಶ ನೀಡಿದಂತಹ ಪ್ರಕರಣಗಳಲ್ಲಿ ಮರು ಸ್ಥಳ ನಿಯುಕ್ತಿಗಾಗಿ ಮಂತ್ರಿಗಳಿಗೆ ಕಡತ ಸಲ್ಲಿಸುವಂತಹ ಸಂಪ್ರದಾಯ ಪಾಲಿಸಲಾಗುತ್ತಿದೆಯೇ ; ಇದ್ದಲ್ಲಿ, ಇದರಿಂದ ವಿಳಂಬ ಮತ್ತು ಭ್ರಷ್ಟಾಚಾರ ಹೆಚ್ಚುವುದಿಲ್ಲವೇ ? (ಸಂಪೂರ್ಣ ಮಾಹಿತಿ ನೀಡುವುದು)